KA / BG-GPO/2515/WPP-47/2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜನವರಿ ೨೯, ೨೦೦೯ (ಮಾಘ ೯, ಶಕ ವರ್ಷ ೧೯೩೦) | ಸಂಚಿಕೆ ೫ |
|---|---|---|

## ಭಾಗ – ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಿಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**
**ಅಧೀಕ್ಷಕ ಅಭಿಯಂತರರವರ ಕಛೇರಿ ಸಣ್ಣ ನೀರಾವರಿ ವೃತ್ತ ಗುಲಬರ್ಗಾ**
**ಅಧಿಸೂಚನೆ**
**ಸಂಖ್ಯೆ:ಅಅ/ಸನೀವೃ/ಗು/ಸಿ–2/2008–09/4148, ದಿನಾಂಕ:31ನೇ ಡಿಸೆಂಬರ್ 2008**

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22)ರ ಅಡಿಯಲ್ಲಿ ಅಧೀಕ್ಷಕ ಅಭಿಯಂತರು, ಸಣ್ಣ ನೀರಾವರಿ ವೃತ್ತ, ಗುಲಬರ್ಗಾ ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರಿ ಅಧಿನಿಯಮದ ಸೆಕ್ಷನ್ 5(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ ಸೆಕ್ಷನ್ 19(1) ರಡಿಯಲ್ಲಿ "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

| ಕ್ರ.ಸಂ | ಕಛೇರಿ ಮತ್ತು ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್5 (2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|---|
| 1 | ಅಧೀಕ್ಷಕ ಅಭಿಯಂತರರು ಸಣ್ಣ ನೀರಾವರಿ ವೃತ್ತ ಗುಲಬರ್ಗಾ 08472–221466 231473, | ಶ್ರೀ ಜಗನ್ನಾಥ ಹಲಿಂಗೆ ಅಧೀಕ್ಷಕ ಅಭಿಯಂತರರು ಸಣ್ಣ ನೀರಾವರಿ ವೃತ್ತ ಗುಲಬರ್ಗಾ | ಶ್ರೀ ಪದ್ಮಪ್ರಭ ತಾಂತ್ರಿಕ ಸಹಾಯಕ ಸಣ್ನ ನೀರಾವರಿ ವೃತ್ತ ಗುಲಬರ್ಗಾ | ಮುಖ್ಯ ಅಭಿಯಂತರರು ಸಣ್ಣ ನೀರಾವರಿ (ಉ) ವಲಯ ಬಿಜಾಪೂರ 08352–277922 277095 |

**ಜಗನ್ನಾಥ ಹಲಿಂಗೆ**
ಅಧೀಕ್ಷಕ ಅಭಿಯಂತರರು
ಸಣ್ಣ ನೀರಾವರಿ ವೃತ್ತ, ಗುಲ್ಬರ್ಗಾ

ಪಿ.ಆರ್. 27

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**
**ಅಧಿಸೂಚನೆ**
**ಸಂಖ್ಯೆ: ಮಾತಂಇ 40 ಇಸಂಸೇ 2008, ಬೆಂಗಳೂರು, ದಿನಾಂಕ:29ನೇ ಡಿಸೆಂಬರ್ 2008**

ಸರ್ಕಾರಿ ಅಧಿಸೂಚನೆ ಸಂಖ್ಯೆ:ಕೃತೋಇ 29 ಕೃಪಬ 2008, ದಿನಾಂಕ:19.12.2008ರಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ, ಬೆಂಗಳೂರು, ಈ ಸಂಸ್ಥೆಯಲ್ಲಿ ಸಹಾಯಕ ಕೃಷಿ ನಿರ್ದೇಶಕರಾಗಿ [ವಿಜ್ಞಾನಿ] ಕಾರ್ಯನಿರ್ವಹಿಸುತ್ತಿರುವ ಶ್ರೀ ಬಿ.ಪಿ. ಲಕ್ಷ್ಮೀಕಾಂತ್ ಇವರಿಗೆ ಉಪ ಕೃಷಿ ನಿರ್ದೇಶಕರ (ವಿಜ್ಞಾನ) ಹುದ್ದೆಗೆ ಬಡ್ತಿ ನೀಡಲಾಗಿದ್ದು, ಅವರ ಸೇವೆಯನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ, ಬೆಂಗಳೂರು, ಈ ಸಂಸ್ಥೆಯಲ್ಲಿ

ನೇಮಿಸುವ ಸಲುವಾಗಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಶಕ್ಕೆ ನೀಡಿರುವುದನ್ನು ಅನುಸರಿಸಿ, ಸದರಿಯವರನ್ನು ಈ ತಕ್ಷಣವೇ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದಲ್ಲಿ ಉಪ ಕೃಷಿ ನಿರ್ದೇಶಕರು, [ವಿಜ್ಞಾನಿ] ಹುದ್ದೆಯಲ್ಲಿ ಮರುನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ವಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 28

**ಸಮಾಜ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಕಇ 387 ಬಿಇಟ 2008, ಬೆಂಗಳೂರು, ದಿನಾಂಕ:31ನೇ ಡಿಸೆಂಬರ್ 2008**

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಕೆಳಕಂಡ ಅಧಿಕಾರಿಗಳನ್ನು ಅವರ ಹೆಸರಿನ ಮುಂದೆ ತೋರಿಸಿರುವ ಸ್ಥಳಕ್ಕೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾವಣೆ/ನಿಯೋಜನೆ ಮಾಡಿ ನೇಮಿಸಲಾಗಿದೆ.

| ಕ್ರ.ಸಂ | ಹೆಸರು, ಪದನಾಮ ಮತ್ತು ಹಾಲಿ ಕೆಲಸ ನಿರ್ವಹಿಸುತ್ತಿರುವ ಸ್ಥಳ | ನಿಯೋಜನೆ/ವರ್ಗಾವಣೆ ಮಾಡಿ ನೇಮಿಸಿರುವ ಸ್ಥಳ |
|---|---|---|
| **1** | ಶ್ರೀ ಎಸ್. ಕೃಷ್ಣೇಗೌಡ, ಜಂಟಿ ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, (ಹಾಲಿ ಸ್ಥಳನಿಯುಕ್ತಿ ನಿರೀಕ್ಷಣೆಯಲ್ಲಿರುವವರು) | ಜಂಟಿ ನಿರ್ದೇಶಕರು, ರಾಜ್ಯ ಅಲೆಮಾರಿ ವಿಶೇಷ ಕೋಶ (ಖಾಲಿ ಹುದ್ದೆ) ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಕೇಂದ್ರ ಕಛೇರಿ, ವಸಂತನಗರ, ಬೆಂಗಳೂರು–52 |
| **2** | ಶ್ರೀ ಪಿ.ಬಿ. ಹೆಗಡೆ, ಸಹಾಯಕ ನಿರ್ದೇಶಕರು (ವಸತಿ ನಿಲಯ) ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಕೇಂದ್ರ ಕಛೇರಿ, ವಸಂತನಗರ ಬೆಂಗಳೂರು–52 | ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿ, ಕೊಪ್ಪಳ ಜಿಲ್ಲೆ, ಕೊಪ್ಪಳ |
| **3** | ಶ್ರೀ ಮುಲ್ಲಾ ಶಬೀರ್ ಅಹ್ಮದ್ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿ, ಗದಗ್ (ಇವರನ್ನು ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿ ಕೋಲಾರ ಈ ಹುದ್ದೆಗೆ ವರ್ಗಾಯಿಸಿರುವುದನ್ನು ಮಾರ್ಪಡಿಸಿ) | ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿ, ಚಿತ್ರದುರ್ಗ (ಶ್ರೀ ದೇವಯ್ಯ ಇವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ) |
| **4** | ಶ್ರೀ ಸಿ.ಟಿ. ಮುದ್ದುಕುಮಾರ್ ಉಪ ನಿರ್ದೇಶಕರು, ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ ಹಾಲಿ ಕಾರ್ಯನಿರ್ವಹಣಾಧಿಕಾರಿ, ತಾಲ್ಲೂಕು ಪಂಚಾಯಿತಿ ಬಳ್ಳಾರಿ | ಇವರನ್ನು ನಿಯೋಜನೆಯ ಮೇಲೆ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿ, ಚಿಕ್ಕಬಳ್ಳಾಪುರ ಕುಮಾರಿ ಸುಮಯ್ಯ ರೂಹಿ ಇವರ ನೇಮಕಾತಿ ಆದೇಶವನ್ನು ರದ್ದುಪಡಿಸಿ ನಿಯೋಜನೆಯ ಮೇಲೆ ವರ್ಗಾಯಿಸಿ ನೇಮಿಸಲಾಗಿದೆ. |
| **5** | ಶ್ರೀ ಗುರುಸಿದ್ದಪ್ಪಾ ಎಸ್ ರುದ್ರಾ, ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿ, ಬೆಳಗಾಂ ಜಿಲ್ಲೆ, ಬೆಳಗಾಂ | ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿ, ಗುಲ್ಬರ್ಗಾ ಜಿಲ್ಲೆ,, ಗುಲ್ಬರ್ಗಾ |

| ಕ್ರ.ಸಂ | ಹೆಸರು, ಪದನಾಮ ಮತ್ತು ಹಾಲಿ ಕೆಲಸ ನಿರ್ವಹಿಸುತ್ತಿರುವ ಸ್ಥಳ | ನಿಯೋಜನೆ/ವರ್ಗಾವಣೆ ಮಾಡಿ ನೇಮಿಸಿರುವ ಸ್ಥಳ |
|---|---|---|
| **6** | ಶ್ರೀ ಲಕ್ಷ್ಮಾನಾಯಕ್ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿ, ರಾಮನಗರ | ಇವರ ಸೇವೆಯನ್ನು ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಇಲ್ಲಿನ ಬೆಂಗಳೂರು ಗ್ರಾಮಾಂತರ ಜಿಲ್ಲಾ ಉಪ ನಿರ್ದೇಶಕರ ಹುದ್ದೆಗೆ ನಿಯೋಜನೆ ಮೇಲೆ ಸ್ಥಳ ನಿಯುಕ್ತಿಗೊಳಿಸಲು ಇವರ ಸೇವೆಯನ್ನು ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ವಶಕ್ಕೆ ನೀಡಲಾಗಿದೆ. ಶ್ರೀ ಲಕ್ಷ್ಮಾನಾಯಕ್ ರವರು ಆಹಾರ ಇಲಾಖೆಯಲ್ಲಿ ನಿಯೋಜನಾ ಆದೇಶ ಬಂದ ನಂತರ ಹಿಂದುಳಿದ ವರ್ಗಗಳ ಇಲಾಖೆಯಿಂದ ಕಾರ್ಯಮುಕ್ತರಾಗತಕ್ಕದ್ದು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಸುಬ್ಬಯ್ಯ**
ಪಿ.ಆರ್. 29 ಸರ್ಕಾರದ ಅಧೀನ ಕಾರ್ಯದರ್ಶಿ–2, ಸಮಾಜ ಕಲ್ಯಾಣ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ವಾಕೈ 147 ಕೈಸೇವಿ 2008, ಬೆಂಗಳೂರು, ದಿನಾಂಕ:31ನೇ ಡಿಸೆಂಬರ್ 2008**

ಶ್ರೀ ಪಿ.ಕೆ. ಮಹಾಂತೇಶ, ಉಪ ನಿರ್ದೇಶಕರು, ನಿಯೋಜನೆ ಮೇರೆಗೆ ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್ ಲಿಂಗಸಗೂರು ಇವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯಿಂದ ಹಿಂಪಡೆದು, ಶ್ರೀ ಕೆ. ಮಹಮ್ಮದ್ ಇರ್ಫಾನ್ ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ದಾವಣಗೆರೆ ಇವರ ಜಾಗಕ್ಕೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಸಿ. ಪ್ರಕಾಶ್**
ಪಿ.ಆರ್. 30 ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

## ಸಾರಿಗೆ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಸಾರಿಇ 113 ವಾಈಸೇ 2008, ಬೆಂಗಳೂರು, ದಿನಾಂಕ:24ನೇ ಡಿಸೆಂಬರ್ 2008**

ರಸ್ತೆ ಸಾರಿಗೆ ನಿಗಮಗಳ ಅಧಿನಿಯಮ 1950ರ (1950ರ ಕೇಂದ್ರ ಅಧಿನಿಯಮ 64) ಕಲಂ 5 ಉಪ ಕಲಂ–2ರಲ್ಲಿ ಹಾಗೂ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ನಿಯಮಾವಳಿಗಳು, 1961ರ ನಿಯಮ 3(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, (1)ಶ್ರೀ ಭಾಸ್ಕರರಾವ್, ಭಾ.ಪೋ.ಸೇ., ಸಾರಿಗೆ ಆಯುಕ್ತರು, ಬೆಂಗಳೂರು ಇವರನ್ನು ಶ್ರೀ ಲಕ್ಷ್ಮಿನಾರಾಯಣ ಭಾ.ಆ.ಸೇ., ಇವರ ಸ್ಥಾನದಲ್ಲಿ, (2) ಶ್ರೀ ಬಿ.ಹೆಚ್.ಮಂಜುನಾಥ್, ಭಾ.ಆ.ಸೇ, ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಲಯ ಇವರನ್ನು ಶ್ರೀಮತಿ ಅಮಿತಾಪ್ರಸಾದ, ಭಾ.ಆ.ಸೇ., ಇವರ ಸ್ಥಾನದಲ್ಲಿ ಮತ್ತು (3)ಶ್ರೀ ಎನ್. ಶಿವಕುಮಾರ್, ಭಾ.ಪೋ.ಸೇ., ಪೊಲೀಸ್ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಇವರನ್ನು ಶ್ರೀ ನಾರಾಯಣನಡಮನಿ ಭಾ.ಪೋ.ಸೇ., ಇವರ ಸ್ಥಾನದಲ್ಲಿ ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯ ನಿರ್ದೇಶಕರ ಮಂಡಳಿಯಲ್ಲಿ ಅಧಿಕಾರಿಯುತ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಸ್. ಶ್ರೀಧರ**
ಪಿ.ಆರ್. 40 ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 77 ಸೇಇಮು 2008, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್ 2008**

ಶ್ರೀ ಎಲ್.ಎಂ. ಖಾನಡೆ, ಜಂಟಿ ನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ ಇವರಿಗೆ ರೂ. 24450–600–26250–675–30300–750–31800ರ ವೇತನ ಶ್ರೇಣಿಯಲ್ಲಿನ ವೃತ್ತಿ ಶಿಕ್ಷಣ ಇಲಾಖೆಯ ನಿರ್ದೇಶಕರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಾನಪನ್ನ ಬಡ್ತಿ ನೀಡಿ ಖಾಲಿ ಇರುವ ನಿರ್ದೇಶಕರ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ಶಿವರಾಮ್**
ಪಿ.ಆರ್. 41 ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಅಧಿಸೂಚನೆ ಸಂಖ್ಯೆ: ಸಿಆಸುಇ 257 ಆಸೇವ 2008, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2008**

ಶ್ರೀ ಆರ್.ಎಸ್. ಬಸಪ್ಪ, ಕೆ.ಎ.ಎಸ್., (ಹಿರಿಯ ಶ್ರೇಣಿ) ಅಧಿಕಾರಿ, ಹಾಲಿ ನೇಮಕಾತಿ ನಿರೀಕ್ಷಣೆಯಲ್ಲಿ ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿಶೇಷ ಜಿಲ್ಲಾಧಿಕಾರಿ (ಜಾರಿದಳ), ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ನಗರ ಜಿಲ್ಲೆ–ಶ್ರೀ ಎನ್. ಶಾಂತಪ್ಪ, ಇವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ ನೇಮಿಸಿದೆ.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಪಿ.ಆರ್. 45

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಇಂಧನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಇಎನ್ 38 ಸಮನ್ವಯ 2008, ಬೆಂಗಳೂರು, ದಿನಾಂಕ: 2ನೇ ಜನವರಿ 2009**

ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಇದರ ಮೆಮೊರ್ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 72 (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈಗಾಗಲೇ ಇರುವ ಅಧಿಕಾರಿ ನಿರ್ದೇಶಕರುಗಳ ಜೊತೆಗೆ ಶ್ರೀ ಆರ್. ವೀರಣ್ಣ ಶೆಟ್ಟಿ ನಿರ್ದೇಶಕರು (ತಾಂತ್ರಿಕ) ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಇವರನ್ನು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ಸದರಿ ಅಧಿಕಾರಿಯವರು ಸೆಸ್ಕ್‌ನ ನಿರ್ದೇಶಕರು (ತಾಂತ್ರಿಕ) ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಮಂಗಳೂರು ಇದರ ಮೆಮೊರ್ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ನ ಆರ್ಟಿಕಲ್ 74 (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈಗಾಗಲೇ ಇರುವ ಅಧಿಕಾರಿ ನಿರ್ದೇಶಕರುಗಳ ಜೊತೆಗೆ ಶ್ರೀ ಚಿಕ್ಕನಂಜಪ್ಪ, ನಿರ್ದೇಶಕರು (ತಾಂತ್ರಿಕ) ಮಂಗಳೂರು, ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಮಂಗಳೂರು ಇವರನ್ನು ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ಸದರಿ ಅಧಿಕಾರಿಯವರು ಮೆಸ್ಕಾಂನ ನಿರ್ದೇಶಕರು (ತಾಂತ್ರಿಕ) ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜಿ. ಸಂಪತ್‌ಕುಮಾರ್**

ಪಿ.ಆರ್. 48

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 95 ಮುಸೇವಿ 2007, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2008**

ಸರ್ಕಾರಿ ಸಂಸ್ಕೃತ ಕಾಲೇಜು, ಮೇಲುಕೋಟೆ ಇಲ್ಲಿನ ಗ್ರೂಪ್–"ಬಿ" ವೃಂದದ ಈ ಕೆಳಕಂಡ ಕಿರಿಯ ಪಂಡಿತರುಗಳಿಗೆ ಸರ್ಕಾರಿ ಸಂಸ್ಕೃತ ಕಾಲೇಜು, ಮೇಲುಕೋಟೆ ಇಲ್ಲಿನ ಸಮೂಹ –ಎ (ಕಿರಿಯ ಶ್ರೇಣಿ) ವೇತನ ಶ್ರೇಣಿ ರೂ. 14,050–25,050ರಲ್ಲಿ ಹಿರಿಯ ಪಂಡಿತರ ಹುದ್ದೆಗಳಿಗೆ ಬಡ್ತಿ ನೀಡಿ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

| ಕ್ರ.ಸಂ | ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಬಡ್ತಿಯ ಮೇಲೆ ನೇಮಿಸಲಾದ ಸ್ಥಳ |
|---|---|---|
| 1 | ಡಾ: ಇ.ಜೆ. ಶ್ರೀವೆಂಕಟೇಶನ್ ಸಾಹಿತ್ಯ ಪಂಡಿತರು | ಹಿರಿಯ ಪಂಡಿತರು, ಸಾಹಿತ್ಯ |
| 2 | ಶ್ರೀ ದತ್ತಾತ್ರೇಯ ಗೋಪಾಲಕೃಷ್ಣ ಭಟ್,<br>ಕೃಷ್ಣ ಯಜುರ್ವೇದ ಪಂಡಿತರು | ಹಿರಿಯ ಪಂಡಿತರು<br>ಕೃಷ್ಣ ಯಜುರ್ವೇದ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಲ್.ಎಸ್. ಶ್ರೀಕಂಠಬಾಬು**

ಪಿ.ಆರ್. 20

ಪೀಠಾಧಿಕಾರಿ

ಕಂದಾಯ ಇಲಾಖೆ (ಮುಜರಾಯಿ)

**ಇಂಧನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಇಎನ್ 84 ಸಮನ್ವಯ 2008(ಭಾಗ–4), ಬೆಂಗಳೂರು, ದಿನಾಂಕ: 2ನೇ ಜನವರಿ 2009**

ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಮೆಮೊರಾಂಡಂ ಆಫ್ ಅಸೋಸಿಯೇಷನ್ ಅಂಡ್ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ನ ಆರ್ಟಿಕಲ್ 22 (1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈಗಾಗಲೇ ಇರುವ ನಿರ್ದೇಶಕರುಗಳ ಜೊತೆಗೆ ಶ್ರೀ ಶಂಕರ್ ವಿರೂಪಾಕ್ಷಿ ನೇಸರ್ಗಿ, ವಿಜಯನಗರ, ಬೆಂಗಳೂರು ಇವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ಅಧಿಕಾರೇತರ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜೆ. ಸಂಪತ್‌ಕುಮಾರ**

ಪಿ.ಆರ್. 47 ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಲಾ 142 ಎಲ್‌ಎಜಿ 2008, ಬೆಂಗಳೂರು, ದಿನಾಂಕ:29ನೇ ಡಿಸೆಂಬರ್ 2008**

ಶ್ರೀ ಎಸ್.ಎಸ್. ಕುಮ್ಮನ್ ಇವರನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ ನಿಯಮ 23ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ನಿಯಮಗಳಲ್ಲಿನ ಷರತ್ತಿಗಳಿಗೊಳಪಟ್ಟು ಹುದ್ದೆಯ ಕಾರ್ಯಭಾರ ವಹಿಸಿಕೊಳ್ಳುವ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಡ್ವೋಕೇಟ್, ಜನರಲ್, ಘಟಕ ಕಛೇರಿ, ಗುಲ್ಬರ್ಗ, ಇಲ್ಲಿನ ಸರ್ಕಾರಿ ವಕೀಲರ ಹುದ್ದೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ಶಿವಾನಂದ**

ಪಿ.ಆರ್. 49 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಲಾ 124 ಎಲ್‌ಎಜಿ 2008, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2008**

ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977 ನಿಯಮ 5(6)ರ ಮೇರೆಗೆ ಶ್ರೀ ಸಿ.ಟಿ. ಜೋಸೆಫ್, ಜಿಲ್ಲಾ ಸರ್ಕಾರಿ ವಕೀಲರು, ಮಡಿಕೇರಿ, ಇವರನ್ನು ದಿನಾಂಕ:31.12.2008 ರಿಂದ ಜಾರಿಗೆ ಬರುವಂತೆ ಹುದ್ದೆಯ ಕರ್ತವ್ಯಗಳಿಂದ ವಿಮುಕ್ತಿಗೊಳಿಸಿ, ಸದರಿ ಹುದ್ದೆಯ ಕರ್ತವ್ಯಗಳನ್ನು ವೀರಾಜಪೇಟೆ ತಾಲ್ಲೂಕಿನ ಅಪರ ಸರ್ಕಾರಿ ವಕೀಲರಿಗೆ ಹೆಚ್ಚುವರಿಯಾಗಿ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ಶಿವಾನಂದ**

ಪಿ.ಆರ್. 50 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಸಂನಿ 482 ಡಬ್ಲ್ಯೂಇಎಸ್ 2008, ಬೆಂಗಳೂರು, ದಿನಾಂಕ:26ನೇ ಡಿಸೆಂಬರ್ 2008**

ಕರ್ನಾಟಕ ಸರ್ಕಾರ ಸಚಿವಾಲಯದ ಸೇವೆಗೆ ಸೇರಿದ ಶ್ರೀ ಎಸ್.ಕೆ. ತೆಗ್ಗಿನಮನಿ, ಸರ್ಕಾರದ ಉಪ ಕಾರ್ಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಅವರಿಗೆ ದಿನಾಂಕ:30.11.2008 ರಿಂದ 20.12.2008ರ ಅವಧಿಗೆ 21 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ. ರಜೆ ಮುಗಿದ ನಂತರ ಸದರಿಯವರು ಅದೇ ಹುದ್ದೆಯಲ್ಲಿ ಮುಂದುವರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ನಿಸಾರ್ ಅಹಮದ್**

ಪಿ.ಆರ್. 52 ಸರ್ಕಾರದ ಅಧೀನ ಕಾರ್ಯದರ್ಶಿ

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 3151 ಎಸ್‌ಟಿಆರ್(ಎಸ್) 2008, ಬೆಂಗಳೂರು, ದಿನಾಂಕ:1ನೇ ಜನವರಿ 2009**

ಶ್ರೀ ಸುರೇಶ್ ಬಿ. ಕೃಷ್ಣಪ್ಪನವರ್, ಸರ್ಕಾರದ ಅಧೀನ ಕಾರ್ಯದರ್ಶಿ, ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ತಮ್ಮ ಪ್ರಸ್ತುತ ಹುದ್ದೆಯ ಜೊತೆ ಹೆಚ್.ಎ.ಎಲ್. ವಿಮಾನ ನಿಲ್ದಾಣ, ಬೆಂಗಳೂರು ಇಲ್ಲಿ ವಿ.ಐ.ಪಿ/ವಿ.ವಿ.ಐ.ಪಿ ಅತಿಥಿಗಳು ಬರುವ ದಿನಗಳಂದು ಹೆಚ್ಚುವರಿಯಾಗಿ ಕರ್ತವ್ಯವನ್ನು ನಿರ್ವಹಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್. 53

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ತಿದ್ದೋಲೆ**

**ಸಂಖ್ಯೆ: ಸಿಆಸುಇ 221 ಸೇಲೋಯು 2008, ಬೆಂಗಳೂರು, ದಿನಾಂಕ:1ನೇ ಜನವರಿ 2009**

ಶ್ರೀ ಬಿ. ಯೋಗಿನಾಥ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ಗುತ್ತಿಗೆ ನೇಮಕಾತಿ ಕುರಿತ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 29 ಸೇಲೋಯು 2007 ದಿನಾಂಕ: 25.4.2007ರ ಆದೇಶ ಭಾಗದಲ್ಲಿನ 2ನೇ ಪಂಕ್ತಿಯಲ್ಲಿ "ದಿನಾಂಕ:2.1.2007 ರಿಂದ" ಎಂದಿರುವುದನ್ನು "ದಿನಾಂಕ:10.1.2007" ರಿಂದ ಎಂದೂ ಮತ್ತು 5 ಮತ್ತು 6ನೆಯ ಪಂಕ್ತಿಯಲ್ಲಿರುವ "ದಿನಾಂಕ 2.1.2007 ರಿಂದ 1.1.2009ರ ಅವಧಿಯವರೆಗೆ" ಎಂದಿರುವುದನ್ನು "ದಿನಾಂಕ:10.1.2007 ರಿಂದ 9.1.2009ರ ಅವಧಿಯವರೆಗೆ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಮಾರ್ಕಂಡೇಯ**

ಪಿ.ಆರ್. 55

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–2)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಲಾ 127 ಎಲ್ಎಜಿ 2007, ಬೆಂಗಳೂರು, ದಿನಾಂಕ:1ನೇ ಜನವರಿ 2009**

ಶ್ರೀ ಎನ್.ಟಿ. ಗಾಂವ್‌ಕರ್, ಇವರನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ ನಿಯಮ 26(2)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ನಿಯಮಗಳಲ್ಲಿನ ಷರತ್ತಿಗಳಿಗೊಳಪಟ್ಟು ಹುದ್ದೆಯ ಕಾರ್ಯಭಾರ ವಹಿಸಿಕೊಳ್ಳುವ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ಅಪರ ಸರ್ಕಾರಿ ವಕೀಲರನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ಶಿವಾನಂದ**

ಪಿ.ಆರ್. 62

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆನಾಸ 132 ಆಇಸೇ 2008, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2008**

ಕರ್ನಾಟಕ ಸರ್ಕಾರಿ ಸೇವಾ ನಿಯಮಗಳು, ನಿಯಮ 68ರನ್ವಯ ಶ್ರೀಮತಿ ಟಿ.ಆರ್. ಶೋಭ, ಮುಖ್ಯ ಲೆಕ್ಕಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು, ಇವರನ್ನು ದಿನಾಂಕ:8.5.2008ರಿಂದ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯಲ್ಲಿನ ಮುಖ್ಯ ಲೆಕ್ಕಾಧಿಕಾರಿಗಳ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹೆಚ್ಚುವರಿ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಭವಾನಿ**

ಪಿ.ಆರ್. 63

ಪೀಠಾಧಿಕಾರಿ(ಪ್ರಭಾರ), ಆಹಾರ–1 ಶಾಖೆ

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 131 ಇಟಿಐ 2007, ಬೆಂಗಳೂರು, ದಿನಾಂಕ: 5ನೇ ಜನವರಿ 2009**

ಉದ್ಯೋಗ ಮತ್ತು ತರಬೇತಿ ಇಲಾಖೆಯ ತರಬೇತಿ ವಿಭಾಗದ ಪ್ರಾಚಾರ್ಯರು ದರ್ಜೆ–2 /ಸಹಾಯಕ ನಿರ್ದೇಶಕರು ಹುದ್ದೆಗೆ ಕರ್ನಾಟಕ ಲೋಕ ಸೇವಾ ಆಯೋಗದ ಅಧಿಸೂಚನೆ ಸಂಖ್ಯೆ:ಪಿಎಸ್‌ಸಿ 15 ಆರ್‌ಟಿಬಿ 2007 ದಿನಾಂಕ:7/03/2008ರನ್ವಯ ಆಯ್ಕೆಗೊಂಡ ಈ ಕೆಳಕಂಡ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ)(ಸಾಮಾನ್ಯ) ನಿಯಮಗಳು 2006ರ ನಿಯಮ, 8(1)ರ ಪ್ರಕಾರ ರೂ. 12,000–22,650 ರ ವೇತನ ಶ್ರೇಣಿಯ ಪ್ರಾಚಾರ್ಯರು ದರ್ಜೆ–2/ಸಹಾಯಕ ನಿರ್ದೇಶಕರ ಹುದ್ದೆಗೆ (ಗ್ರೂಪ್–ಬಿ) ಪರಿವೀಕ್ಷಣೆಯ ಮೇಲೆ ಈ ಕೆಳಕಾಣಿಸಿದ ಷರತ್ತು/ನಿಬಂಧನೆಗಳಿಗೆ ಒಳಪಟ್ಟು ನೇಮಕ ಮಾಡಲಾಗಿದೆ ಹಾಗೂ ಅವರ ಹೆಸರಿನ ಮುಂದೆ ನಮೂದಿಸಿರುವ ಸ್ಥಳಕ್ಕೆ ನಿಯುಕ್ತಿಗೊಳಿಸಲಾಗಿದೆ.

| ಕ್ರ.ಸಂ | ಕೆ.ಪಿ.ಎಸ್.ಸಿ. ಕ್ರಮ ಸಂ | ಹೆಸರು/ಶ್ರೀ/ಶ್ರೀಮತಿ | ಸ್ಥಳ |
|---|---|---|---|
| 1 | 32 | ನಾಗುಬಾಯಿ,<br>ತಂದೆ:ಪುಂಡಲೀಕ<br>ಸೂರ್ಯವಂಶಿ,<br>ಕೋರೆಕಲ್ ಅಂಚೆ,<br>ಔರಾದ್ (ಬಿ) ತಾಲ್ಲೂಕು<br>ಬೀದರ್ ಜಿಲ್ಲೆ | ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ,<br>ಔರಾದ್<br>ಬೀದರ್ ಜಿಲ್ಲೆ |

1) ಮೇಲ್ಕಂಡ ಅಭ್ಯರ್ಥಿಯ ಜೇಷ್ಠತೆಯು ಕರ್ನಾಟಕ ಲೋಕಸೇವಾ ಆಯೋಗದ ಆಯ್ಕೆಪಟ್ಟಿಯಲ್ಲಿನ ಜ್ಯೇಷ್ಠತೆಯ ಪ್ರಕಾರ ನಿಗಧಿಯಾಗಿರುತ್ತದೆ.

2) ಮೇಲ್ಕಂಡ ಅಭ್ಯರ್ಥಿಯ ಪರೀಕ್ಷಾರ್ಥಿ ಅವಧಿಯು ಎರಡು ವರ್ಷಗಳಾಗಿರುತ್ತದೆ. ಮೇಲ್ಕಂಡ ಅಭ್ಯರ್ಥಿಯ ಪರೀಕ್ಷಾರ್ಥ ಅವಧಿಯಲ್ಲಿ ಪ್ರಾಚಾರ್ಯರು ದರ್ಜೆ–2/ಸಹಾಯಕ ನಿರ್ದೇಶಕರ ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು.

3) ಮೇಲ್ಕಂಡ ಅಭ್ಯರ್ಥಿಯ ಈ ಅಧಿಸೂಚನೆಯನ್ನು ನೋಂದಾಯಿತ ಅಂಚೆಯ ಮೂಲಕ ರವಾನಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಯುಕ್ತರ ಕಚೇರಿ, ಉದ್ಯೋಗ ಮತ್ತು ತರಬೇತಿ ಇಲಾಖೆ ಕೌಶಲ್ಯಭವನ, ಡೈರಿ ವೃತ್ತಿ ಬೆಂಗಳೂರು–560029 ಇಲ್ಲಿ ವರದಿ ಮಾಡಿಕೊಳ್ಳತಕ್ಕದ್ದು.

4) ಅಭ್ಯರ್ಥಿಯು ನೇಮಕಾತಿ ಮತ್ತು ಸೇವಾ ಷರತ್ತುಗಳು ಹಾಗೂ ಕಾಲಕಾಲಕ್ಕೆ ಜಾರಿಯಲ್ಲಿರುವ ನಿಯಮಗಳು ಹಾಗೂ ಆದೇಶಗಳಿಗೆ ಒಳಪಟ್ಟಿರುತ್ತಾರೆ.

5) ಮೇಲ್ಕಂಡ ಅಭ್ಯರ್ಥಿಯ ಈ ನೇಮಕಾತಿಯು ಭಾರತ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ (ಸಿವಿಲ್) 232/99 ಮತ್ತು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ:560/2008 & 1551/2008 ರಲ್ಲಿ ನೀಡಿರುವ ಮಧ್ಯಂತರ ತೀರ್ಪು ಹಾಗೂ ಅಂತಿಮ ತೀರ್ಪಿಗೆ ಬದ್ಧವಾಗುವ ಷರತ್ತಿಗೊಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್. 64

ಪೀಠಾಧಿಕಾರಿ

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಆಕುಕ 30 ಹೆಚ್‌ಎಸ್‌ಹೆಚ್ 2008, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2008**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಗುತ್ತಿಗೆ ಆಧಾರಿತ ವೈದ್ಯಾಧಿಕಾರಿಗಳ ಸೇವೆಯನ್ನು ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸಿ, ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ:ಆಕುಕ 966 ಹೆಚ್ ಎಸ್ ಹೆಚ್ 2005 ದಿನಾಂಕ:6.7.2007ರ ಕ್ರಮ ಸಂಖ್ಯೆ:432ರಲ್ಲಿ Dr. Parasurama Kashannavar,Community Health Centre, Mangalura, Koppal Dist'' ಎಂಬುದಕ್ಕೆ ಬದಲಾಗಿ ''Dr. Parashuram

Kashanavar, Community Health Centre, Mangalore, koppal District" ಎಂದು ಹಾಗೂ ಜನ್ಮ ದಿನಾಂಕವನ್ನು "ದಿನಾಂಕ:12–4–1976" ಎಂಬುದಕ್ಕೆ ಬದಲಾಗಿ "ದಿನಾಂಕ:12.4.1974" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಪಿ.ಆರ್. 65 ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಲಾ 119 ಎಲ್ಎಜಿ 2008, ಬೆಂಗಳೂರು, ದಿನಾಂಕ: 1/6ನೇ ಜನವರಿ 2009**

ಶ್ರೀ ವಿ.ಎ. ನಾಯ್ಕ ಇವರನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ ನಿಯಮ 26 (2)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ನಿಯಮಗಳಲ್ಲಿನ ಷರತ್ತಿಗಳಿಗೊಳಪಟ್ಟು ಹುದ್ದೆಯ ಕಾರ್ಯಭಾರ ವಹಿಸಿಕೊಳ್ಳುವ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಬಾಗಲಕೋಟೆ ಜಿಲ್ಲೆಯ ಬೀಳಗಿ ತಾಲ್ಲೂಕಿನ ಅಪರ ಸರ್ಕಾರಿ ವಕೀಲರನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ಶಿವಾನಂದ**

ಪಿ.ಆರ್. 69 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಒಇ 408 ಪೊಸಿಪ 2008, ಬೆಂಗಳೂರು, ದಿನಾಂಕ: 2ನೇ ಜನವರಿ 2009**

ಸ್ಥಳ ನೇಮಕಾತಿ ನಿರೀಕ್ಷಣೆಯಲ್ಲಿರುವ ಶ್ರೀ ಮೊಹಮ್ಮದ್ ತಾಜ್ ಮಲ್ ಆಲಿ, ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್ (ಸಿವಿಲ್) ಇವರನ್ನು ರಾಜ್ಯ ಗುಪ್ತವಾರ್ತೆ ಇಲ್ಲಿ ಖಾಲಿ ಇರುವ ಡಿವೈ.ಎಸ್.ಪಿ ಹುದ್ದೆಗೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 71 ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಲೋಇ 15 ಬನೌಸೇ 2007, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2008**

ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ ಕಿರಿಯ ಜಲಮೋಜಣಿದಾರರಾಗಿ ಕೆಲಸ ನಿರ್ವಹಿಸುತ್ತಿರುವ ಶ್ರೀ ಯಜ್ಞಕುಮಾರ್ ಇವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೂ. 12000–22650ರ ವೇತನ ಶ್ರೇಣಿಯ ಸಹಾಯಕ ಜಲಮೋಜಣಿದಾರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ಜಲಮೋಜಣಿದಾರರ ಹುದ್ದೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ಸಿದ್ದಗಂಗಯ್ಯ**

ಪಿ.ಆರ್. 1559 ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ, ಬಂದರುಗಳು ಮತ್ತು

ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಸಿ)